# ಕರ್ನಾಟಕ ವಿಧಾನ ಪರಿಷತ್ತು

01. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1378

02. ಮಾನ್ಯ ವಿಧಾನ ಪರಿಷತ್ತಿನ ಸದಸ್ಯರ ಹೆಸರು : ಶ್ರೀ. ಕೆ.ಎ.ತಿಪ್ಪೇಸ್ವಾಮಿ. (ನಾಮ ನಿರ್ದೇಶನ ಹೊಂದಿದವರು)

03. ಉತ್ತರಿಸುವ ದಿನಾಂಕ : 23.09.2021

04. ಉತ್ತರಿಸುವ ಸಚಿವರು. : ಮಾನ್ಯ ಗೃಹ ಸಚಿವರು.

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಕಾರವಾರ ಜಿಲ್ಲೆ, ಹೊನ್ನಾವರ ತಾಲ್ಲೂಕು, ಗುಣವಂತೆ ಗ್ರಾಮದ ಮುಗಳಿ ಹೋಬಳಿಯ ಪಿ.ಯು.ಸಿ. ವಿದ್ಯಾರ್ಥಿನಿಯೊಬ್ಬರ ಶವ ಕುಮಟಾ ಮಿರ್ಜಾನ್ ಕೋಟೆಯ ಬಾವಿಯಲ್ಲಿ ದೊರೆತ್ತಿದ್ದು, ಈ ಬಗ್ಗೆ ಸಿಒಡಿ ತನಿಖೆಯಾಗಿ, ದಿನಾಂಕ: 12.03.2007 ರಂದು ಸಿಒಡಿಯವರು ಆತ್ಮಹತ್ಯೆ ಪ್ರಕರಣವೆಂದು ದಾಖಲಿಸಿ ವರದಿ ನೀಡಿ ಪ್ರಕರಣವನ್ನು ಮುಕ್ತಾಯಗೊಳಿಸಿರುವುದು ನಿಜವೇ; (ಹಾಗಿದ್ದಲ್ಲಿ, ಪೂರ್ಣ ಮಾಹಿತಿ ನೀಡುವುದು) | ದಿನಾಂಕ: 17-10-2005 ರಂದು 10-30 ಗಂಟೆಗೆ ಫಿರ್ಯಾದುದಾರರಾದ ಶ್ರೀ ಕೃಷ್ಣ ಸಣ್ಣಕೂಸ ನಾಯ್ಕ ಸಾ: ಗುಣವಂತೆ ಮುಗಳಿ, ತಾಲ್ಲೂಕು ಹೊನ್ನಾವರ ರವರು ಕುಮಟಾ ಠಾಣೆಗೆ ಬಂದು ನೀಡಿದ ದೂರಿನಲ್ಲಿ ಫಿರ್ಯಾದುದಾರರ ಸಹೋದರಿಯಾದ ಕು॥ ಶಾರದಾ ತಂದೆ ಸಣ್ಣಕೂಸ ನಾಯ್ಕ ಪ್ರಾಯ 19 ವರ್ಷ ಗುಣವಂತೆ, ಸಾ॥ ಮುಗಳಿ, ಹೊನ್ನಾವರ ರವರು ದಿನಾಂಕ: 13-10-2005 ರಂದು 09-00 ಗಂಟೆಗೆ ಹೊನ್ನಾವರದಿಂದ ಕುಮಟಾ ಶಿಕ್ಷಕರ ತರಬೇತಿ ಕಾಲೇಜಿಗೆ ಹೋದವಳು ಕಾಲೇಜಿಗೂ ಹೋಗದೇ ರೂಮಿಗೂ ಹೋಗದೆ ಕಾಣೆಯಾದ ಕುರಿತು ಹೊನ್ನಾವರ ಪೋಲೀಸ್ ಠಾಣೆಯಲ್ಲಿ ಹುಡುಗಿ ಕಾಣೆ ಪ್ರಕರಣವು ದಾಖಲಾಗಿದ್ದು ಇರುತ್ತದೆ. ದಿನಾಂಕ: 17-10-2005 ರಂದು ಕುಮಟಾ ತಾಲ್ಲೂಕಿನ ಕುಮಟಾ ಪೋಲೀಸ್ ಠಾಣಾ ವ್ಯಾಪ್ತಿಯ ಮಿರ್ಜಾನ್ ಕೋಟೆಯ ಬಾವಿಯಲ್ಲಿ ಕಾಣೆಯಾದ ಯುವತಿ ಕು॥ ಶಾರದಾ ತಂದೆ ಸಣ್ಣಕೂಸ ನಾಯ್ಕ ರವರ ಮೃತ ದೇಹವು ಅನುಮಾನಾಸ್ಪದ ರೀತಿಯಲ್ಲಿ ದೊರೆತ್ತಿದ್ದು ಈ ಕುರಿತು ಕುಮಟಾ ಪೋಲೀಸ್ ಠಾಣೆಯಲ್ಲಿ ಯು.ಡಿ.ಆರ್ ನಂ: 31/2005 ಕಲಂ: 174 (ಸಿ) ಸಿ.ಆರ್.ಪಿ.ಸಿ ಪ್ರಕಾರ ಪ್ರಕರಣ ದಾಖಲಾಗಿ ತನಿಖೆ ಕೈಗೊಂಡಿದ್ದು ಇರುತ್ತದೆ.<br>ಸದರಿ ಪ್ರಕರಣವನ್ನು ದಿನಾಂಕ: 25-02-2006 ರಂದು ಸಿ.ಓ.ಡಿ ಬೆಂಗಳೂರು ರವರಿಗೆ ಮುಂದಿನ ತನಿಖೆಗಾಗಿ ವರ್ಗಾವಣೆ ನೀಡಲಾಗಿದ್ದು, ಸಿ ಓ ಡಿ ಬೆಂಗಳೂರು ರವರು |

| | | |
|---|---|---|
| | | ಸದರಿ ಪ್ರಕರಣದ ತನಿಖೆಯನ್ನು ಪೂರ್ಣಗೊಳಿಸಿ ದಿನಾಂಕ: 12/03/2007 ರಂದು "ಬಿ" ಅಂತಿಮ ವರದಿಯನ್ನು ಮಾನ್ಯ ತಾಲ್ಲೂಕು ದಂಡಾಧಿಕಾರಿಗಳು ಕುಮಟಾ ರವರ ನ್ಯಾಯಾಲಯಕ್ಕೆ ಸಲ್ಲಿಸಲಾಗಿರುತ್ತದೆ.<br>ಮಾನ್ಯ ತಾಲ್ಲೂಕು ದಂಡಾಧಿಕಾರಿಗಳು ಕುಮಟಾ ರವರ ನ್ಯಾಯಾಲಯದ ಆದೇಶ ಸಂಖ್ಯೆ: ಎಂ.ಎ.ಜಿ/ಸಿ.ಆರ್/ಯು.ಡಿ–ಸಿ.ಆರ್/29/07-08 ದಿನಾಂಕ: 21-07-2007 ರಂತೆ ಮೃತಳ ಮರಣವು "ಆತ್ಮಹತ್ಯೆ" ಪ್ರಕರಣವೆಂದು ಪರಿಗಣಿಸಿ "ಬಿ" ಅಂತಿಮ ವರದಿಯನ್ನು ಅಂಗೀಕರಿಸಲಾಗಿರುತ್ತದೆ. |
| ಆ | ಈ ಪ್ರಕರಣದಲ್ಲಿ ಪ್ರಭಾವಿಗಳ ಕೈವಾಡವಿದ್ದು, ದುಷ್ಕರ್ಮಿಗಳು ಈ ವಿದ್ಯಾರ್ಥಿನಿಗೆ ಬಲಾತ್ಕಾರ ಮಾಡಿ, ಸಾಮೂಹಿಕ ಅತ್ಯಾಚಾರ ಎಸಗಿ ನಂತರ ಅವಳನ್ನು ಬಾವಿಗೆ ಎಸೆದು ಹೋಗಿದ್ದಾರೆ; ಅಂದಿನಿಂದ ಇಂದಿನವರೆಗೆ ಮೃತಳ ತಾಯಿ ಹಾಸಿಗೆ ಹಿಡಿದಿದ್ದು, ಹುಚ್ಚಳಂತೆ ವರ್ತಿಸುತ್ತಿದ್ದು, ಈ ಪ್ರಕರಣವನ್ನು ಮರು ತನಿಖೆ ಮಾಡಿಸಿ, ಸತ್ಯಾಂಶ ಹೊರತಂದು ತಪ್ಪಿತಸ್ಥರನ್ನು ಶಿಕ್ಷಿಸಲು ಸರ್ಕಾರ ಕ್ರಮ ಕೈಗೊಳ್ಳುವುದೇ? | ಸಿ.ಓ.ಡಿ ತನಿಖಾಧಿಕಾರಿಗಳು, ಬೆಂಗಳೂರು ರವರು ಸದರಿ ಪ್ರಕರಣದ ತನಿಖೆ ನಡೆಸಿ "ಆತ್ಮಹತ್ಯೆ" ಪ್ರಕರಣ ಎಂದು ಅಂತಿಮ ವರದಿಯನ್ನು ಮಾನ್ಯ ತಾಲ್ಲೂಕು ದಂಡಾಧಿಕಾರಿಗಳು, ಕುಮಟಾ ರವರ ನ್ಯಾಯಾಲಯಕ್ಕೆ ಸಲ್ಲಿಸಿದ್ದು, ಮಾನ್ಯ ನ್ಯಾಯಾಲಯವು ವರದಿಯನ್ನು ಅಂಗೀಕರಿಸಿದ ಕಾರಣ ಸದರಿ ಪ್ರಕರಣವನ್ನು ಮರು ತನಿಖೆ ನಡೆಸುವ ಅಗತ್ಯತೆ ಕಂಡು ಬರುವುದಿಲ್ಲ. |

HD 30 SDN 2021

(ಅರಗ ಜ್ಞಾನೇಂದ್ರ)
ಗೃಹ ಸಚಿವರು